|| ಶ್ರೀಃ ||

# ನಾಸ್ತಿಕ್ಯವಾದ ನಿರಾಸ

*

ಲೇಖಕರು:

ಶ್ರೀ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರು

1981

ಶ್ರೀ ಪಲಿಮಾ[illegible] ಉಡುಪಿ

# ಆಶೀರ್ವಚನ

●

ಇದರ ಪ್ರಕಾಶನದ ಸರ್ವ ವೆಚ್ಚವನ್ನು ನಿರ್ವಹಿಸಿದ ಶ್ರೀಯುತ ನಾರಾಯಣ ರಾವ್, ದುರ್ಗಾ ಸ್ಟೋರ್ಸ್, ಗದಗ ಇವರಿಗೆ ಶ್ರೀ ಹರಿಗುರುಗಳ ಅನುಗ್ರಹ ಸದಾ ಇರಲೆಂದು ಪ್ರಾರ್ಥಿಸುತ್ತೇವೆ.

**ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರು,**

ಭಂಡಾರಕೇರಿ–ಪಲಿಮಾರು ಮಠ, ಉಡುಪಿ.

**ಶ್ರೀ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದರ ಉಪದೇಶ**

# ನಾಸ್ತಿಕ್ಯವಾದದ ನಿರಾಸ

ಶ್ರೀಮದಾಚಾರ್ಯರು ತತ್ತ್ವನಿರ್ಣಯವೆಂಬ ತಮ್ಮ ಗ್ರಂಥದಲ್ಲಿ "**ಯಸ್ಯ ತೌ ನಾಭಿಮತೌ ನಾಸೌ ಸಮಯೀ**" ಎಂಬ ವಾಕ್ಯದಿಂದ ನಾಸ್ತಿಕ್ಯವಾದದ ನಿರಾಸವನ್ನು ಮಾಡಿದ್ದಾರೆ. ಆ ವಾಕ್ಯದ ಅಭಿಪ್ರಾಯವನ್ನು ಟೀಕಾಕಾರರಾದ ಶ್ರೀ ಜಯತೀರ್ಥರು ವಿವರಿಸಿದ್ದಾರೆ. ಶ್ರೀಮದಾಚಾರ್ಯರ ವಾಕ್ಯಗಳಿಗೆ ಬಹು ಅರ್ಥಗಳಿವೆ ಎಂದು ಅವರು ಹೇಳಿರುವುದರಿಂದ, ಅವರು ತೋರಿಸಿದ ಮಾರ್ಗದಿಂದ ಆ ವಾಕ್ಯಕ್ಕೆ ಬೇರೆ ಅರ್ಥಗಳನ್ನು ಇಲ್ಲಿ ವಿವರಿಸಲಾಗುತ್ತದೆ.

**ಯಸ್ಯ**—ಯಾವ ನಾಸ್ತಿಕನಿಗೆ, **ತೌ**—ಪ್ರಸಿದ್ಧಗಳಾದ ಅನುಮಾನಾಗಮಗಳು, **ನಾಭಿಮತೌ**-ಸಮ್ಮತಗಳಾಗುವುದಿಲ್ಲವೋ, **ಅಸೌ**—ಆ ನಾಸ್ತಿಕನು, **ನಸಮಯೀ**—ತನ್ನ ಪಕ್ಷದ ಸಮರ್ಥನೆಯಲ್ಲಿ ಸಮರ್ಥನಾಗುವುದಿಲ್ಲವಾದುದರಿಂದ ಸಿದ್ಧಾಂತಿ ಎಂದು ಆಗಲಾರನು.

ಈ ಅರ್ಥವನ್ನು ಒಂದು ದೃಷ್ಟಾಂತವನ್ನು ಹೇಳಿ ವಿವರಿಸುವೆವು. ಒಬ್ಬನು ಎಲ್ಲರ ಹತ್ತಿರವೂ ಯುದ್ಧಕ್ಕೆ ಸ್ವೈರ ಹೋಗುತ್ತಾನೆ. ಅವನ ಕೈಯಲ್ಲಿ ಆಯುಧವು ಇರಲಿಲ್ಲ. ಆದರೆ ಆತನ ಎದುರಾಳಿಗಳ ಹತ್ತಿರ ಅನೇಕ ಆಯುಧಗಳಿದ್ದವು. ಹೀಗೆ ಆಯುಧವಿಲ್ಲದೆ ಅನೇಕಾಯುಧಗಳುಳ್ಳವರ ಹತ್ತಿರ ಯುದ್ಧಕ್ಕೆ ಹೋದರೆ, ಇವನು ಆಯುಧರಹಿತನಾದು

ದರಿಂದ ಯುದ್ಧದಲ್ಲಿ ನಿಲ್ಲಲು ಅನರ್ಹನೆಂದು ಎಲ್ಲರೂ ಹೇಳುತ್ತಾರೆ. ಇದರಂತೆಯೇ ನಾಸ್ತಿಕನು ದೇವರು ಧರ್ಮಾಧರ್ಮಾದಿಗಳು ಇಲ್ಲವೆಂದು ಹೇಳುತ್ತಾ ಅದನ್ನು ಸಾಧಿಸುವುದಕ್ಕೆ ಬೇಕಾದ ಪ್ರಮಾಣಗಳು ಇಲ್ಲದವನಾಗಿ ತನ್ನ ಪಕ್ಷವನ್ನು ಸಾಧಿಸಲಿಕ್ಕಾಗಿ ವಾದವನ್ನು ಮಾಡುತ್ತೇನೆಂದು ಬರುತ್ತಾನೆ. ಇತರರು ದೇವರು ಧರ್ಮಾಧರ್ಮಗಳು ಇವೆ ಎಂಬುವ ತಮ್ಮ ಪಕ್ಷವನ್ನು ಸಾಧಿಸುವುದಕ್ಕೆ ಬೇಕಾದ ಅನುಮಾನಾಗಮರೂಪಪ್ರಮಾಣಗಳುಳ್ಳವರಾಗಿದ್ದಾರೆ. ನಾಸ್ತಿಕನಮತದಲ್ಲಿ ಅನುಮಾನಾಗಮಗಳು, ಪ್ರಮಾಣಗಳೇ ಅಲ್ಲ. ಪ್ರತ್ಯಕ್ಷವೆಂಬುವ ಒಂದು ಪ್ರಮಾಣವು ಅವನಲ್ಲಿ ಇದ್ದರೂ ಅದರಿಂದ ದೇವರು, ಧರ್ಮಾಧರ್ಮಗಳು ಇಲ್ಲವೆಂದು ಸಿದ್ಧಮಾಡಲಿಕ್ಕೆ ಆಗುವುದಿಲ್ಲ. ನಾಸ್ತಿಕನು ತನಗೆ ದೇವರು, ಧರ್ಮಾಧರ್ಮಗಳು ಪ್ರತ್ಯಕ್ಷ ಕಾಣುವುದಿಲ್ಲವೆಂಬ ಕಾರಣದಿಂದ ಅವುಗಳು ಇಲ್ಲವೆಂದು ಹೇಳುವುದು, ವಿಜ್ಞಾನಿಗಳು ಚಂದ್ರಲೋಕಕ್ಕೆ ಹೋಗಿ ಬಂದದ್ದು, ತಾವು ನೋಡಲಿಲ್ಲವೆಂಬ ಕಾರಣದಿಂದ ಅದನ್ನು ಅಪಲಾಪ ಮಾಡುವುದಕ್ಕೆ ಸಮಾನವಾಗುತ್ತದೆ. ಈ ರೀತಿ ಪ್ರಮಾಣವೆಂಬ ಸಾಧನವು ಇಲ್ಲದೆ ವಾದಕ್ಕೆ ಬರುವ ನಾಸ್ತಿಕನು ವಾದಮಾಡಲಿಕ್ಕೆ ಅನರ್ಹನು ಎಂದು ಆಚಾರ್ಯರ ವಾಕ್ಯದ ಅಭಿಪ್ರಾಯ.

*

ಶ್ರೀಮದಾಚಾರ್ಯರ ವಾಕ್ಯಕ್ಕೆ ಇನ್ನೊಂದು ಅರ್ಥವು ಈ ರೀತಿ ಇರುತ್ತದೆ. **ಯಸ್ಯ**—ಯಾವ ನಾಸ್ತಿಕನಿಗೆ, **ತೌ**—ಪ್ರಸಿದ್ಧಗಳಾದ ಅನುಮಾನಾಗಮಗಳು, **ನಾಭಿಮತೌ**-ಸಮ್ಮತಗಳಲ್ಲವೋ, **ಅಸೌ**-ಆ

ನಾಸ್ತಿಕನು, **ನ ಸಮಯೀ**—ತಾನು ಹುಟ್ಟಿದ ಸಮಯವನ್ನು ಇತರರಿಗೆ ಸಿದ್ಧ ಮಾಡಲು ಅಸಮರ್ಥನಾದಾನು. ಅಂದರೆ ನಾಸ್ತಿಕನು ತಂದೆತಾಯಿಗಳಿಂದ ತಾನು ಹುಟ್ಟಿದ ಸಮಯವನ್ನು ತಿಳಿದು ಇತರರಿಗೆ ಹೇಳುತ್ತಾನೆ. ಆದರೆ ಆ ಸಮಯವು ಅವನಿಗೆ ಪ್ರತ್ಯಕ್ಷವಲ್ಲ. ಅನುಮಾನ ಆಗಮಗಳನ್ನು ತಾನು ಪ್ರಮಾಣವೆಂದು ಒಪ್ಪುವದಿಲ್ಲ. ಅವುಗಳನ್ನು ಒಪ್ಪಿದ್ದರೆ ತಂದೆತಾಯಿಗಳ ವಚನರೂಪ ಆಗಮದಿಂದ ಅಥವಾ ತನ್ನ ದೇಹದ ಬೆಳವಣಿಗೆ ಎಂಬ ಯುಕ್ತಿಯುಳ್ಳ ಅನುಮಾನದಿಂದ ತಾನು ತಿಳಿದು ಇತರರಿಗೆ ಹೇಳಲಿಕ್ಕೆ ಸಮರ್ಥನಾಗುತ್ತಿದ್ದ. ನಾಸ್ತಿಕನು ಅನುಮಾನಾಗಮಗಳನ್ನು ಪ್ರಮಾಣಗಳಲ್ಲ ಎಂದು ಹೇಳುತ್ತಾ ತಾನು ಹುಟ್ಟಿದ ಸಮಯವನ್ನು ತಾನು ತಿಳಿಯಲಿಕ್ಕೆ ಹೇಗೆ ಸಮರ್ಥನಾಗಲಾರನೋ ಹಾಗೆಯೇ ಅನುಮಾನಾಗಮಗಳನ್ನು ಪ್ರಮಾಣವೆಂದು ಒಪ್ಪದ ಅವನು ದೇವರು, ಧರ್ಮಾಧರ್ಮಗಳು ಇಲ್ಲವೆಂದು ಸಿದ್ಧಮಾಡಲಿಕ್ಕೂ ಸಮರ್ಥನಾಗುವುದಿಲ್ಲ.

ಹಾಗೆಯೇ ಯಸ್ಯ—ಯಾವ ನಾಸ್ತಿಕನಿಗೆ, ತೌ—ಪ್ರಸಿದ್ಧಗಳಾದ ಧರ್ಮಾಧರ್ಮಗಳು, ನಾಭಿಮತೌ—ಸಮ್ಮತಗಳಲ್ಲವೋ, ಅಸೌ—ಆ ನಾಸ್ತಿಕನು ನಸಮಯೀ—ಜಗತ್ತಿಗೆ ಹಿತಕರವಾದ ನಿಯಮವನ್ನು ಹೇಳುವವನು ಆಗಲಾರನು ಎಂದೂ ಆ ವಾಕ್ಯದ ಅರ್ಥ. ಅಂದರೆ ಅಸತ್ಯವನ್ನು ಹೇಳುವ ಚೌರ್ಯ ಪರಹಿಂಸೆಗಳನ್ನು ಮಾಡುವ ಜನರಿಗೆ ನೀವು ಹೀಗೆ ಮಾಡಬಾರದು ಎಂದು ನಾಸ್ತಿಕನು ಹೇಳಿದರೆ ಏಕೆ ಮಾಡಬಾರದು ಚೌರ್ಯಾದಿಗಳಿಂದ ನಮಗೆ ವಿಶೇಷ ದ್ರವ್ಯ ಪ್ರಾಪ್ತಿಯಾಗುತ್ತದೆ,

ನಾವು ಬಲಿಷ್ಠರಿದ್ದೇವೆ, ನಮ್ಮನ್ನು ಯಾರೂ ಹಿಂಸಿಸುವಂತೆ ಇಲ್ಲ ಎಂದು ಉತ್ತರ ಕೊಟ್ಟರೆ ನಾಸ್ತಿಕನು ನಿರುತ್ತರನಾಗುತ್ತಾನೆ. ಅವರನ್ನು ಕುರಿತು ಒಳ್ಳೆಯ ನಿಯಮಗಳನ್ನು ಬೋಧಿಸಲಿಕ್ಕೆ ಸಮರ್ಥನಾಗುವುದಿಲ್ಲ. ಸಂಸ್ಕೃತಭಾಷೆಯಲ್ಲಿ ಸಮಯಬಂಧ ಎಂಬ ಶಬ್ದವಿದೆ. ಅಲ್ಲಿ ಸಮಯವೆಂದರೆ ನಿಯಮವೆಂದು ಅರ್ಥ. ಆ ಅರ್ಥವನ್ನು ಇಲ್ಲಿ ಇಟ್ಟುಕೊಳ್ಳಬೇಕು.

ಹಾಗೆಯೇ ಯಸ್ಯ–ಯಾವ ಆಸ್ತಿಕನಿಗೆ, ತೌ–ಆದಾವ ಧರ್ಮಾಧರ್ಮಗಳು, ಅಭಿಮತೌ–ಸಮ್ಮತಗಳೋ, ಅಸೌ–ಆ ಆಸ್ತಿಕನು ನ ಸಮಯೀನ–ಇತರರನ್ನು ಕುರಿತು ಚೌರ್ಯಾದಿಗಳನ್ನು ಮಾಡಬಾರದು ಇತ್ಯಾದಿ ನಿಯಮವನ್ನು ಹೇಳದವನು ಆಗಲಾರನು ಎಂದೂ ಆ ವಾಕ್ಯಕ್ಕೆ ಅರ್ಥ. ಅಂದರೆ ನಾವು ಬಲಿಷ್ಠರಾಗಿದ್ದೇವೆ ನಮ್ಮನ್ನು ಯಾರೂ ಹಿಂಸಿಸಿ ನಮ್ಮಿಂದ ದ್ರವ್ಯವನ್ನು ಅಪಹರಿಸುವಂತಿಲ್ಲ. ಆದ್ದರಿಂದ ನಾವು ಇತರರನ್ನು ಹಿಂಸಿಸಿ ದ್ರವ್ಯವನ್ನು ಸಂಪಾದಿಸಿ ಸುಖದಿಂದ ಏಕೆ ಇರಬಾರದು ಎಂದು ಕೇಳಿದಾಗ ಆಸ್ತಿಕನು ಅವರನ್ನುಕುರಿತು ನಿಮಗೆ ಹಾಗೆ ಮಾಡಿದರೆ ಮಹಾಪಾಪವು ಬರುತ್ತದೆ, ನರಕಲೋಕದಲ್ಲಿ ಮಹಾದುಃಖವಾಗುತ್ತದೆಂದು ಹೇಳಿ ತಾನು ಒಳ್ಳೆ ನಿಯಮವನ್ನು ಜನರಿಗೆ ಹೇಳದೆ ಇರಲಾರನು.

ಹಾಗೆಯೇ **ಯಸ್ಯ**–ಯಾವ ನಾಸ್ತಿಕನಿಗೆ, **ತೌ**–ಆ ಧರ್ಮಾಧರ್ಮಗಳು, **ನಾಭಿಮತೌ**—ಸಮ್ಮತಗಳಲ್ಲವೋ, **ಅಸೌ**–ಆ ನಾಸ್ತಿಕನು, **ನಸಮಯೀ**—ಬಹುಸಮಯ ಬದುಕಲಾರನು ಎಂದೂ ಆ

ವಾಕ್ಯಕ್ಕೆ ಅರ್ಥ, ಅಂದರೆ ನಾಸ್ತಿಕನು ಧರ್ಮ ಅಧರ್ಮ ಇಲ್ಲವೆಂದು ಜನರಿಗೆ ಬೋಧಿಸಿ ಅವರಿಗೆ ಯಥೇಷ್ಟ ಭೋಗಕ್ಕೆ ಅನುಕೂಲಮಾಡಿ ಅವರ ಅನುರಾಗಪಾತ್ರನಾಗಿ ಅವರಿಂದ ಯಥೇಷ್ಟ ದ್ರವ್ಯವನ್ನು ಸಂಪಾದಿಸಿದಾಗ ಆ ನಾಸ್ತಿಕನನ್ನು ಮೂರ್ಖರು ಬಂದು ಕೊಂದು ಅವನು ಸಂಪಾದಿಸಿದ ದ್ರವ್ಯವನ್ನು ಅಪಹರಿಸುತ್ತಾರೆ. ಅವರಿಗೆ ಪಾಪದ ಭಯವು ಇಲ್ಲದಂತೆ ಮಾಡಿದ್ದು ಈ ನಾಸ್ತಿಕನು. ತಾನು ಮಾಡಿದ್ದು ತನ್ನ ಮೃತ್ಯುವಿಗೆ ಕಾರಣವಾಗುತ್ತದೆ. ಈ ರೀತಿ ತನ್ನ ಅನರ್ಥಕ್ಕೆ ಕಾರಣವಾದ ನಾಸ್ತಿಕ್ಯವಾದವನ್ನು ಅವನು ಸಮರ್ಥಿಸುವುದು ಉಚಿತವಾಗುವುದಿಲ್ಲ.

ಹಾಗೆಯೇ **ಯಸ್ಯ**-ಯಾವ ಈ ಪದಾರ್ಥಸಮುದಾಯಕ್ಕೆ, (ಸ್ವತಃ) **ತೌ**-ಪ್ರವೃತ್ತಿ ಯಾ ನಿವೃತ್ತಿರೂಪ ವ್ಯಾಪಾರಗಳು, **ನಾಭಿಮತೌ**-ಸಮ್ಮತಗಳಲ್ಲವೋ **ಅಸೌ**-ಆ ಪದಾರ್ಥಸಮುದಾಯವು (ನ) **ಸಮೀಹೀನ**-ಪ್ರವರ್ತಕನಾದ ಈಶ್ವರನಿಂದ ರಹಿತವಾಗಲಾರದು ಎಂದೂ ಈ ವಾಕ್ಯಕ್ಕೆ ಅರ್ಥ. ಅಂದರೆ ಈ ಜಗತ್ತಿಗೆ ಸ್ವತಃ ಪ್ರವೃತ್ತಿಯನ್ನೂ ಸ್ವತಃ ನಿವೃತ್ತಿಯನ್ನೂ ಮಾಡುವ ಶಕ್ತಿಯು ಇಲ್ಲ. ಇಂತಹ ಜಗತ್ತಿನಲ್ಲಿ ಪ್ರವೃತ್ತ್ಯಾದಿಗಳು ಆಗಬೇಕಾದರೆ ಪ್ರವರ್ತಕನು ಬೇರೆ ಒಬ್ಬ ಇದ್ದಾನೆಂದು ಒಪ್ಪಲೇಬೇಕು ಎಂದು ಆಸ್ತಿಕರು ಈಶ್ವರನು ಇದ್ದಾನೆಂದು ಅನುಮಾನಪ್ರಮಾಣದಿಂದ ಸಿದ್ಧಮಾಡುತ್ತಾರೆ. ಆಗ ಅನೀಶ್ವರವಾದಿಯಾದ ನಾಸ್ತಿಕನು ನಿರುತ್ತರನಾಗುತ್ತಾನೆ. ಈ ಅರ್ಥದಲ್ಲಿ ಸಮಯೀ ಎಂಬಲ್ಲಿ 'ಅಯಃ ಶುಭಾವಹೋ ವಿಧಿಃ' ಎಂಬ ಕೋಶ ಪ್ರಕಾರ ಅಯಃ ಎಂಬ ಶಬ್ದಕ್ಕೆ ಜ್ಞಾನರೂಪನಾದ ಪರಬ್ರಹ್ಮನು ಎಂದು ಅರ್ಥ. ಸಮ್

ಎಂಬ ಉಪಸರ್ಗದಿಂದ ಜ್ಞಾನದಲ್ಲಿ ಪೂರ್ಣತ್ವವು ಹೇಳಲ್ಪಡುತ್ತದೆ.
ಶಮಾಯೀ ಎಂಬಲ್ಲಿ ಇನಿ ಪ್ರತ್ಯಯವು ಇದ್ದ ಕಾರಣ ಪ್ರವರ್ತಕನಾದ ಈಶ್ವ
ರನಿಂದ ಸಹಿತವಾದದ್ದು ಎಂದು ಅರ್ಥವಾಗುತ್ತದೆ. ಈ ಅರ್ಥದಲ್ಲಿ
ನಞ್‌ಗೆ ಆವೃತ್ತಿಯಿಂದ ಅರ್ಥವನ್ನು ಹೇಳಬೇಕು. ಆಸ್ತಿಕನು ಈಶ್ವರ
ನನ್ನು ಈ ರೀತಿ ಸಮರ್ಥಿಸಿದಾಗ ನಾಸ್ತಿಕನು ಕರುಣಾನಿಧಿ ಆಗಿರುವ
ಈಶ್ವರನು ನಮಗೆ ದುಃಖವನ್ನು ಏಕೆ ಕೊಡುತ್ತಾನೆಂದು ಕೇಳುತ್ತಾನೆ.
ನಾಸ್ತಿಕರ ಈ ಪ್ರಶ್ನೆಗೂ ಶ್ರೀಮದಾಚಾರ್ಯರ ಇದೇ ವಾಕ್ಯವೇ ಉತ್ತ
ರವನ್ನು ಹೇಳುತ್ತದೆ. **ಯಸ್ಯ**-ಯಾವನಿಗೆ, **ತೌ**-ಆದಾವ ಧರ್ಮಾ
ಧರ್ಮಗಳು, **ಸಾಭಿಮತೌ**-ಸಮ್ಮತಗಳಲ್ಲವೋ, **ಅಸೌ**-ಆವನು, **ನಶ
ಮಯೀ**-ಈಶ್ವರವಾದಿಯು ಅಲ್ಲ ಎಂದು ಆ ವಾಕ್ಯದ ಅರ್ಥ. ಈಶ್ವ
ರವಾದಿಗಳು ಎಲ್ಲರೂ ಧರ್ಮಾಧರ್ಮಗಳನ್ನು ಒಪ್ಪಿದ್ದಾರೆ. ಆದುದ
ರಿಂದ ಈಶ್ವರನು ಸುಖದುಃಖಗಳನ್ನು ಕೊಡುವುದು ಅವರವರ ಧರ್ಮ
ಅಧರ್ಮಗಳನ್ನು ನಿಮಿತ್ತಮಾಡಿಕೊಂಡು. ಆದುದರಿಂದ ಈಶ್ವರನಿಗೆ
ವೈಷಮ್ಯ ನೈರ್ಘೃಣ್ಯ ದೋಷಗಳು ಇಲ್ಲ ಎಂದು ಅಭಿಪ್ರಾಯ.

ಇದರ ಮೇಲೆ ನಾಸ್ತಿಕನು ಧರ್ಮಾಧರ್ಮಗಳನ್ನು ನಮ್ಮಿಂದ
ಈಶ್ವರನೇ ಮಾಡಿಸುತ್ತಾನೆಂದು ನೀವು ಹೇಳುತ್ತೀರಿ. ಆದುದರಿಂದ
ಈಶ್ವರನು ನಮ್ಮಿಂದ ಅಧರ್ಮವನ್ನು ಮಾಡಿಸಿ ದುಃಖವನ್ನು ಕೊಡುವು
ದರಿಂದ ಅವನಿಗೆ ನಿರ್ದಯತ್ವಾದಿ ದೋಷವು ಏಕೆ ತಗಲುವುದಿಲ್ಲ ಎಂದು
ಕೇಳುತ್ತಾನೆ. ಅವನ ಈ ಪ್ರಶ್ನೆಗೂ ಈ ವಾಕ್ಯವೇ ಉತ್ತರವನ್ನು ಹೇಳು
ತ್ತದೆ. ಏನೆಂದರೆ, **ಯಸ್ಯ**-ಯಾರಿಗೆ, **ತೌ**-ಅನಾದಿಗಳಾದ ಆಯಾಯ

ಜೀವರ ಯೋಗ್ಯತೆ, ಆ ಆ ಜೀವಯೋಗ್ಯತಾನುಸಾರಫಲದಾತೃ ಈಶ್ವರ ಈ ಎರಡು, **ನಾಭಿಮತೌ**—ಸಮ್ಮತಗಳಲ್ಲವೋ, **ಅಸೌ**—ಅವನು, **ನ ಸಮಯೀ**—ಈಶ್ವರವಾದಿಯೇ ಅಲ್ಲ ಎಂದು ಆ ವಾಕ್ಯದ ಅರ್ಥ. ಈಶ್ವರನು ಅನಾದಿ ಜೀವಯೋಗ್ಯತೆಗಳನ್ನು ಅನುಸರಿಸಿ ಕರ್ಮಗಳನ್ನು ಮಾಡಿಸಿ ಸುಖ ದುಃಖಗಳನ್ನು ಕೊಡತಕ್ಕವನೆಂದು ಯಾರು ಹೇಳುತ್ತಾರೋ ಅವರು ಮಾತ್ರ ಈಶ್ವರವಾದಿಗಳು. ಇತರರು ಈಶ್ವರವಾದ್ಯಾಭಾಸರು. ಆದುದರಿಂದ ಈಶ್ವರನಲ್ಲಿ ಯಾವ ದೋಷಗಳೂ ಇಲ್ಲ.

ಜೀವರುಗಳಲ್ಲಿ ಅನಾದಿಯೋಗ್ಯತಾತಾರತಮ್ಯವನ್ನು ಒಪ್ಪದೆ ಜೀವರುಗಳಲ್ಲಿ ಸಮತಾವನ್ನು ಒಪ್ಪಿಯೇ ಈಶ್ವರನಲ್ಲಿ ಪ್ರಸಕ್ತವಾದ ವೈಷಮ್ಯವೆಂಬ ದೋಷವನ್ನು ಪರಿಹರಿಸುವ ಕ್ರಮವು ರಾಮಾನುಜಾಚಾರ್ಯರ ಗ್ರಂಥಗಳಲ್ಲಿ ಕಾಣುತ್ತದೆ. ಅದು ಹೇಗೆಂದರೆ ಈಶ್ವರನು ಎಲ್ಲ ಜೀವರುಗಳಿಗೆ ಕರ್ಮಗಳನ್ನು ಮಾಡಲಿಕ್ಕೆ ಅನುಕೂಲವಾಗಿರುವ ದೇಹೇಂದ್ರಿಯಗಳನ್ನು ಕೊಟ್ಟು ಉದಾಸೀನನಾಗುತ್ತಾನೆ. ಆಗ ಜೀವನು ತನ್ನ ಇಚ್ಛೆಯಿಂದಲೇ ಆರಂಭದ ಕರ್ಮವನ್ನು ಮಾಡುತ್ತಾನೆ. ಈ ಆರಂಭದ ಕರ್ಮದಲ್ಲಿ ಈಶ್ವರನಪ್ರೇರಣೆ ಏನೂ ಇಲ್ಲ. ಜೀವನು ಆರಂಭದಲ್ಲಿ ಕೆಟ್ಟ ಕರ್ಮವನ್ನು ಮಾಡಿದರೆ ಅದನ್ನು ಅನುಸರಿಸಿ ಮುಂದೆ ಈಶ್ವರನು ಆ ಜೀವನಿಂದ ಕೆಟ್ಟ ಕರ್ಮವನ್ನೇ ಮಾಡಿಸುತ್ತಾನೆ. ಈ ರೀತಿ ಜೀವನ ಕೆಟ್ಟ ಕರ್ಮಗಳ ಪರಂಪರೆಗೆ ಜೀವನ ಆರಂಭದ ಕೆಟ್ಟ ಕರ್ಮವು ಮೂಲಕಾರಣ. ಇದೇ ರೀತಿಯಲ್ಲಿ ಜೀವನು ಆರಂಭದಲ್ಲಿ ತನ್ನ ಇಚ್ಛೆಯಿಂದ ಒಳ್ಳೆ ಕರ್ಮವನ್ನು ಮಾಡಿದರೆ ಅದನ್ನು ಅನುಸರಿಸಿ ಈಶ್ವರನು

ಆತನಿಂದ ಮುಂದೆ ಒಳ್ಳೆ ಕರ್ಮಗಳನ್ನೇ ಮಾಡಿಸುತ್ತಾನೆ. **ಈ ರೀತಿ** ಜೀವನ ಸತ್ಕರ್ಮಗಳ ಪರಂಪರೆಗೂ ಜೀವನೇ ಮೂಲಕಾರಣ. ಆದುದರಿಂದ ಈಶ್ವರನಿಗೆ ವೈಷಮ್ಯವು ಇಲ್ಲ ಎಂದು ರಾಮಾನುಜಾಚಾರ್ಯರು ಹೇಳುತ್ತಾರೆ.

ಈ ರೀತಿ ರಾಮಾನುಜಾಚಾರ್ಯರು ಹೇಳಿದ್ದರಿಂದ ಅವರು ಅನೀಶ್ವರವಾದಿಗಳು ಎಂದು ಜ್ಞಾನಿಗಳು ಹೇಳಲಿಕ್ಕೆ ಅವಕಾಶವುಂಟಾಯಿತು. ಏಕೆಂದರೆ ಸರ್ವಕರ್ತೃತ್ವ ಸರ್ವಕಾರಯಿತೃತ್ವಗಳು ಈಶ್ವರನ ಲಕ್ಷಣಗಳು. ಈ ಈಶ್ವರನ ಲಕ್ಷಣಗಳು ಇಲ್ಲದವನು ಈಶ್ವರನು ಅಲ್ಲ. ಆದುದರಿಂದ ರಾಮಾನುಜಾಚಾರ್ಯರು ತಾನು ಈಶ್ವರವಾದಿ ಎಂದು ಹೇಳಿಕೊಂಡರೂ ಆ ಈಶ್ವರನಲ್ಲಿ ಈಶ್ವರಲಕ್ಷಣಗಳು ಇಲ್ಲವಾದುದರಿಂದ ಅವರು ಈಶ್ವರವಾದಿಗಳು ಆಗಲು ಶಕ್ಯವಿಲ್ಲ. **ಯಸ್ಯ**-ಯಾವನಿಗೆ, **ತೌ**-ಪ್ರಸಿದ್ಧಗಳಾದ ಸರ್ವಕರ್ತೃತ್ವ ಸರ್ವಕಾರಯಿತೃತ್ವಗಳೆಂಬ ಈಶ್ವರಲಕ್ಷಣಗಳು, **ನಾಭಿಮತೌ**-ಈಶ್ವರನಲ್ಲಿ ಸಂಮತಗಳಲ್ಲವೋ, **ಅಸೌ**—ಅವನು **ನಸಮಯೀ**- ಈಶ್ವರವಾದಿಯಲ್ಲ ಎಂದೂ ಶ್ರೀಮದಾಚಾರ್ಯರ ವಾಕ್ಯದ ಅರ್ಥ.

ಜೀವನು ತನಗೆ ಆರಂಭದಲ್ಲಿ ಸತ್ಕರ್ಮವನ್ನು ಮಾಡಲಿಕ್ಕೆ ಬೇಕಾದ ಎಲ್ಲ ಸೌಕರ್ಯವನ್ನು ಈಶ್ವರನು ಕೊಟ್ಟರೂ ತಾನು ಕೆಟ್ಟ ಕರ್ಮವನ್ನು ಏಕೆ ಮಾಡಿದನು ? ಇನ್ನೊಬ್ಬನು ಆರಂಭದಲ್ಲಿ ಸತ್ಕರ್ಮವನ್ನು ಏಕೆ ಮಾಡಿದನು ? ಎಂದು ಪ್ರಶ್ನೆಯು ಉಂಟಾದರೆ ರಾಮಾನುಜಾಚಾರ್ಯರು ತಮ್ಮ ಜೀವರ ಸಮತಾವಾದವನ್ನು ಬಿಟ್ಟು ಜೀವರಲ್ಲಿ ಅನಾದಿ ಯೋಗ್ಯತಾತಾರತಮ್ಯವನ್ನು ಒಪ್ಪದೆ ನಿರ್ವಾಹವಿಲ್ಲ.

